ಅನುಬಂಧ-3

# KSSIDC

ESTABLISHED 1985
EXTENT 5.35 Acres

| SHEDS | PLOTS |
|---|---|
| C -08<br>D -04<br>SM -08<br>Total-20 Sheds. | SplPlots -40<br>ROADS : (Approximate)<br>1. 211 m (12m wide)<br>2. 187 m (12 m wide)<br>3. 63 m (12 m wide)<br>4. 346 m (12m wide)<br>5. 238 m (12 m wide)<br>6. 57 m (12 m wide)<br>7. 30 m (12 m wide)<br>Total : 1032 m |

ROADS
ASPHALTED ROAD
WBM ROAD
PROPOSED ROAD

OHT — SUMP
WATER SUPPLY LINE — GI — PVC
INDIVIDUAL SEPTIC TANK
UGD LINE
STREET LIGHTS — SV — FTL
TRANSFORMERS — Nos — Capacity

SCALE : 1 cms = 10 m
( All measurements are in metres not to measure)

## LAY OUT OF INDUSTRIAL ESTATE TIPTUR TUMKUR Dt.,

(B.S. NAGESH)
ASST EXECUTIVE ENGINEER
KSSIDC SUB DIV, TUMKUR

(G. PANDALINGAPPA)
EXECUTIVE ENGINEER
KSSIDC DIVISION BANGALORE

(S. P. RAGHUNATHA)
SUPERINTENDING ENGINEER
BANGALORE




TIPTUR----------BH ROAD--- STATE HIGH WAY---------BANGA ORE




24/09/2020
AGM (IPS)
Tumkur

ಅನುಬಂಧ-6 (ಬಿ)

KARNATAKA STATE SMALL INDUSTRIES DEVELOPMENT CORPORATION LTD
(A Government of Karnataka Undertaking)

Registered Office

No.GM(IES):PAS:ALT:
SERVICE RD:96-97

Administrative Office Building,
Industrial Estate, Rajajinagar,
Bangalore-560044. Dt. 4.2.1997.

OFFICE ORDER

Sub: Allotment of Service Roads and criteria laid down thereon -reg.

The Board of KSSIDC in its 253rd Meeting held on 16.1.1996 have decided that henceforth there shall be no allotment of service roads in any of our Industrial Estates. In the event it is found that service roads are not useful to the Corporation and that any public amenities such as drains and sewerage lines are not running there under, the Corporation may allot such service roads after detailed examination of the issue and charge atleast three times the land value fixed for allotment of land in such Industrial Estates.

The Zonal Chief Managers(IEs) and Deputy Chief Managers(IEs) will keep in mind the above said directions of the Board whenever they are to send proposals for allotment of any service road inside the Industrial Estates coming under their respective jurisdictions.

GENERAL MANAGER(IEs).

To:
1) The Chief Manager(IEs) Z-I, KSSIDC Ltd., I.E. Bangalore-44.
2) The Chief Manager(IEs) Z-II -do- Hubli.
3) The Chief Manager(IEs) Z-III -do- Mysore.
4) The Dy.Chief Manager(IEs) I.E. Rajajinagar/Peenya/Hubli/Mysore/Gulbarga/Shimoga/Tumkur.
5) All Branch Managers/Sales Managers/Sr.Assts/Jr.Assts-incharge of Industrial Estates.



CC to:
1) The Chief Manager(Finance)/(C&M)/(Co.Ord), B'lore.
2) The D.C.M. (WA)/IA/(IEA)

Copy submitted to: Chairman & Managing Director - for kind infn.

**ಕರ್ನಾಟಕ ಸರ್ಕಾರ**

ಸಂ: ಆಇ 62 ಸಿಎಸ್‌ಎಲ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:26/09/2020.

U.S
29/9/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಆರ್ಥಿಕ ಇಲಾಖೆ,
ವಿಧಾನ ಸೌಧ,
**ಬೆಂಗಳೂರು – 560 001.**

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು – 560 001.**

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ದೇಶಪಾಂಡೆ ಆರ್.ವಿ. (ಹಳಿಯಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:757ಕ್ಕೆ ಉತ್ತರಗಳನ್ನು ಕಳುಹಿಸುವ ಬಗ್ಗೆ.

**ಉಲ್ಲೇಖ:** ತಮ್ಮ ಕಛೇರಿಯ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/7ಅ/ಚುಗು–ಚುರ.ಪ್ರಶ್ನೆ/07/2020, ದಿನಾಂಕ:21/09/2020.

** * **

ಮೇಲ್ಕಂಡ ವಿಷಯದ ಬಗ್ಗೆ ಉಲ್ಲೇಖಿತ ಪತ್ರದ ಕೋರಿಕೆಯನ್ವಯ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ದೇಶಪಾಂಡೆ ಆರ್.ವಿ. (ಹಳಿಯಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:757ಕ್ಕೆ ಸಂಬಂಧಿಸಿದಂತೆ ಉತ್ತರಗಳನ್ನು (25 ಪ್ರತಿಗಳು) ಇದರೊಂದಿಗೆ ಲಗತ್ತಿಸಿ ತಮಗೆ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಕೆ. ಸಾವಿತ್ರಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾ.ತೆ–1).

26/9/2020

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ : 757
2) ಸದಸ್ಯರ ಹೆಸರು : ಶ್ರೀ ದೇಶಪಾಂಡೆ ಆರ್.ವಿ. (ಹಳಿಯಾಳ)
3) ಉತ್ತರಿಸುವ ದಿನಾಂಕ: : 29/09/2020
4) ಉತ್ತರಿಸುವ ಸಚಿವರ ಹೆಸರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | 2018-19, 2019-20, 2020-21ನೇ ಸಾಲುಗಳಲ್ಲಿ ಕರ್ನಾಟಕ ರಾಜ್ಯದಿಂದ ಸಂಗ್ರಹವಾದ ಜಿ.ಎಸ್.ಟಿ ಎಷ್ಟು; ಸಿ.ಜಿ.ಎಸ್.ಟಿ ಎಷ್ಟು; | (ರೂ. ಕೋಟಿಗಳಲ್ಲಿ) |

| ಆರ್ಥಿಕ ವರ್ಷ | ಒಟ್ಟು ಜಿ.ಎಸ್.ಟಿ ಸಂಗ್ರಹಣೆ | ಸಿ.ಜಿ.ಎಸ್.ಟಿ ಸಂಗ್ರಹಣೆ |
|---|---|---|
| 2018-19 | 78713.67 | 17302.76 |
| 2019-20 | 83409.83 | 19818.76 |
| 2020-21 (ಆಗಸ್ಟ್ ಅಂತ್ಯದವರೆಗೆ) | 24762.40 | 6192.04 |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಆ) | ಎಸ್.ಜಿ.ಎಸ್.ಟಿ. ಎಷ್ಟು; ಸೆಸ್ಸುಗಳು ಮತ್ತಿತರ ರೂಪದಲ್ಲಿ ಎಷ್ಟು ಸಂಗ್ರಹವಾಗಿದೆ; | (ರೂ. ಕೋಟಿಗಳಲ್ಲಿ) |

| ಆರ್ಥಿಕ ವರ್ಷ | ಎಸ್.ಜಿ.ಎಸ್.ಟಿ ಸಂಗ್ರಹಣೆ | ಸೆಸ್ಸು ಸಂಗ್ರಹಣೆ |
|---|---|---|
| 2018-19 | 23395.43 | 10073.83 |
| 2019-20 | 26484.16 | 9445.67 |
| 2020-21 (ಆಗಸ್ಟ್ ಅಂತ್ಯದವರೆಗೆ) | 7783.14 | 2516.74 |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಇ) | ಜಿ.ಎಸ್.ಟಿ. ಪರಿಹಾರ ಎಷ್ಟು? | (ರೂ. ಕೋಟಿಗಳಲ್ಲಿ) |

| ಆರ್ಥಿಕ ವರ್ಷ | ಪಾವತಿಯಾದ ಜಿ.ಎಸ್.ಟಿ ಪರಿಹಾರ |
|---|---|
| 2018-19 | 18340.47 |
| 2019-20 | 20105.89 |
| 2020-21 | (ಏಪ್ರಿಲ್‌ನಿಂದ ಜುಲೈ ಅಂತ್ಯದವರೆಗೆ ರೂ.13764.07 ಕೋಟಿಯಷ್ಟು ಪರಿಹಾರ ಮೊತ್ತವು ಬರಬೇಕಾಗಿರುತ್ತದೆ) |

ಸಂಖ್ಯೆ: ಆಇ 62 ಸಿಎಸ್ಎಲ್ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯ ಮಂತ್ರಿ.



**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,**
**ಕರ್ನಾಟಕ ಸರ್ಕಾರದ ಸಚಿವಾಲಯ,**
**ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,**
**ಬೆಂಗಳೂರು –560001. ದೂ. 22034319**

ಸಂಖ್ಯೆ: ಸಿಐ 122 ಸಿಎಸ್‌ಸಿ 2020

ದಿನಾಂಕ: 26.09.2020.

U.S
29/9/2020

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ (ಆಳಂದ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1832ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ (ಆಳಂದ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1832ಕ್ಕೆ ವಿಧಾನಸಭೆಯಲ್ಲಿ ದಿ: 29.09.2020ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 30 ಪ್ರತಿಗಳನ್ನು ಈ ಪತ್ರದೊಂದಿಗೆ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

(ಸುಮತಿ ಎಸ್.) 26.09.2020
ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಮುಖ್ಯಮಂತ್ರಿಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–01.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, (ಎಂ.ಎಸ್.ಎಂ.ಇ. & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು–01.
3. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು–01.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1832
ಸದಸ್ಯರ ಹೆಸರು : ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ (ಆಳಂದ)
ಉತ್ತರಿಸಬೇಕಾದ ದಿನಾಂಕ : 29.09.2020
ಉತ್ತರಿಸುವವರು : ಮುಖ್ಯಮಂತ್ರಿಗಳು.

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಭಾಗದಲ್ಲಿ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಲು ಸಣ್ಣ ಕೈಗಾರಿಕೆ ಸ್ಥಾಪನೆಗೆ ಉತ್ತೇಜನ ನೀಡಲು ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ; ಹಾಗೂ ಸಣ್ಣ ಕೈಗಾರಿಕೆಗಳ ಸ್ಥಾಪನೆಗಾಗಿ ಎಷ್ಟು ಅನುದಾನವನ್ನು ಮೀಸಲಿರಿಸಲಾಗಿದೆ; (ವಿವರ ನೀಡುವುದು) | ಕಲ್ಯಾಣ ಕರ್ನಾಟಕವನ್ನು ಒಳಗೊಂಡಂತೆ ರಾಜ್ಯದ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರವು ರೂಪಿಸಿರುವ ಯೋಜನೆಗಳು ಈ ಕೆಳಗಿನಂತಿವೆ:<br>1. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನಾ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಟ ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಮಹಿಳಾ ಉದ್ದಿಮೆದಾರರಿಗೆ ಶೇಕಡ 4ರ ಬಡ್ಡಿದರದಲ್ಲಿ ರೂ.2.00 ಕೋಟಿಯವರೆಗೂ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ.<br>3. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ6 ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 75 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಟ 2 ಎಕರೆ) ಮತ್ತು ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br>5. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ 60 ರಷ್ಟು ಗರಿಷ್ಟ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ. |

6. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಟ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿರಹಿತ ಗರಿಷ್ಟ ರೂ.33 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ.

7. ದಿನಾಂಕ: 01–04–2017 ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳು ಸಾಲ ಪಡೆಯುವ ಸಂದರ್ಭದಲ್ಲಿ ಕೆ.ಎಸ್.ಎಫ್.ಸಿ ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸಿರುವ ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಭರಿಸಲಾಗುತ್ತಿದೆ.

8. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಗಳು ದಿನಾಂಕ: 01–04–2017 ರಿಂದ ಪ್ರಾರಂಭವಾಗಿರುವ ಹೊಸ ಸಣ್ಣ ಮತ್ತು ಅತೀ ಸಣ್ಣ ಕೈಗಾರಿಕಾ ಘಟಕಗಳಿಗೆ ಮೊದಲ 5 ವರ್ಷಗಳ ಅವಧಿಗೆ ಪ್ರತಿ ಯುನಿಟ್‌ಗೆ 2 ರೂ.ಗಳಷ್ಟು ವಿದ್ಯುಚ್ಛಕ್ತಿ ಸಹಾಯಧನ ನೀಡಲಾಗುತ್ತಿದೆ.

9. ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2020–25 ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.
   1. ಮುದ್ರಾಂಕ ಶುಲ್ಕ ವಿನಾಯಿತಿ
   2. ನೋಂದಣಿ ಶುಲ್ಕ ರಿಯಾಯಿತಿ.
   3. ಬಂಡವಾಳ ಹೂಡಿಕೆ ಸಹಾಯಧನ
   4. ಕಿರು ಮತ್ತು ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಸಹಾಯಧನ
   5. ಭೂ ಪರಿವರ್ತನಾ ಶುಲ್ಕ ಮರುಪಾವತಿ.
   6. ರಫ್ತು ಆಧಾರಿತ ಘಟಕಗಳಿಗೆ ರಿಯಾಯಿತಿ.
   7. ತ್ಯಾಜ್ಯ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಸಹಾಯಧನ.
   8. ವಿದ್ಯುತ್ ತೆರಿಗೆ ವಿನಾಯಿತಿ
   9. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಸಹಾಯಧನ
   10. ಮಳೆ ನೀರುಕೊಯ್ಲು / ಸಂರಕ್ಷಣೆ ಸಹಾಯಧನ

10. ಕರ್ನಾಟಕ ರಾಜ್ಯ ಕೃಷಿ ವಾಣಿಜ್ಯ ಮತ್ತು ಆಹಾರ ಸಂಸ್ಕರಣಾ ನೀತಿ 2015 ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.
    1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು
    2. ನೋಂದಣಿ ಶುಲ್ಕ ರಿಯಾಯಿತಿ.

| | | |
|---|---|---|
| | | 3. ಬಂಡವಾಳ ಹೂಡಿಕೆ ಸಹಾಯಧನ<br>4. ಬಡ್ಡಿ ಸಹಾಯಧನ<br>5. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>6. ಕೃಷಿ ಉತ್ಪನ್ನ ಮಾರುಕಟ್ಟೆತೆರಿಗೆಯಿಂದ ವಿನಾಯಿತಿ.<br>7. ತ್ಯಾಜ್ಯ ಸಂಸ್ಕರಣಾಯಂತ್ರ ಸ್ಥಾಪನೆಗೆ ಸಹಾಯಧನ.<br><br>2020-21 ನೇ ಸಾಲಿನಲ್ಲಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ರೂ.312.26 ಕೋಟಿ ಅನುದಾನವನ್ನು ಮೀಸಲಿರಿಸಲಾಗಿದೆ |
| ಆ) | ಆಳಂದ ತಾಲ್ಲೂಕಿನ ವ್ಯಾಪ್ತಿಯಲ್ಲಿ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಈಗಾಗಲೇ ಸಣ್ಣ ಮಟ್ಟದಲ್ಲಿ ಕೈಗಾರಿಕಾ ಪ್ರದೇಶ ನಿರ್ಮಾಣವಾಗಿದ್ದು, ನಿರುದ್ಯೋಗ ಸಮಸ್ಯೆ ಬಗೆಹರಿಸುವ ದೃಷ್ಟಿಯಿಂದ ಆಳಂದ ತಾಲ್ಲೂಕಿನಲ್ಲಿ ಇನ್ನೂ ಹೆಚ್ಚಿನ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಯಾವ ಕ್ರಮ ಕೈಗೊಳ್ಳಲಾಗುವುದು? (ಸಂಪೂರ್ಣ ವಿವರ ನೀಡುವುದು) | ಪ್ರಸ್ತುತ ಆಳಂದ ತಾಲ್ಲೂಕಿನ, ಆಳಂದ ಪುರಸಭೆ ವ್ಯಾಪ್ತಿಯ ಸರ್ವೇ.ನಂ. 394 ರಲ್ಲಿ ಒಟ್ಟು 10.00 ಎಕರೆ ಪ್ರದೇಶದಲ್ಲಿ ಕೈಗಾರಿಕಾ ವಸಾಹತುವನ್ನು ಸ್ಥಾಪಿಸಿ 55 ಸಂಖ್ಯೆ ವಿವಿಧ ಮಾದರಿಯ ಕೈಗಾರಿಕಾ ನಿವೇಶನಗಳನ್ನು ಅಭಿವೃದ್ಧಿ ಪಡಿಸಿ ಹಾಗೂ 4 ಸಂಖ್ಯೆ ಕೈಗಾರಿಕಾ ಮಳಿಗೆಗಳನ್ನು ನಿರ್ಮಿಸಿ ಕೈಗಾರಿಕೋದ್ಯಮಿಗಳಿಗೆ ಹಂಚಿಕೆ ಮಾಡಲಾಗಿದೆ.<br><br>ಮುಂದುವರೆದು, ಆಳಂದ ತಾಲ್ಲೂಕಿನಲ್ಲಿ ಹೆಚ್ಚಿನ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಅನುವು ಮಾಡಿಕೊಟ್ಟು, ನಿರುದ್ಯೋಗ ಸಮಸ್ಯೆ ಬಗೆಹರಿಸುವ ದೃಷ್ಟಿಯಿಂದ, ಆಳಂದ ಗ್ರಾಮದ ಸರ್ವೇ.ನಂ.674ರಲ್ಲಿನ 8.20 ಎಕರೆ ಜಮೀನಿನಲ್ಲಿ ಕೈಗಾರಿಕಾ ವಸಾಹತುವನ್ನು ಸ್ಥಾಪಿಸುವ ಪ್ರಸ್ತಾವನೆಯು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತದ ಮುಂದೆ ಇರುತ್ತದೆ. ಇದಕ್ಕಾಗಿ, ಈಗಾಗಲೇ ಜಮೀನಿಗೆ ಸರ್ಕಾರಿ ಮಾರ್ಗಸೂಚಿ ಬೆಲೆಯ ಶೇ.40 ರಷ್ಟು ಮೊತ್ತ ರೂ.2,80,500/- ಗಳನ್ನು ಕೆ.ಐ.ಎ.ಡಿ.ಬಿ. ಸಂಸ್ಥೆಗೆ ಪಾವತಿಸಿದ್ದು, ಕೆ.ಐ.ಎ.ಡಿ.ಬಿ. ಸಂಸ್ಥೆಯು ಭೂಸ್ವಾಧೀನ ಪ್ರಕ್ರಿಯೆಯನ್ನು ಅಂತಿಮಗೊಳಿಸಿ, ಈ ಜಮೀನನ್ನು ನಿಗಮಕ್ಕೆ ಹಸ್ತಾಂತರಿಸಬೇಕಾಗಿರುತ್ತದೆ. ಪ್ರಸ್ತಾಪಿತ ಜಮೀನು ನಿಗಮಕ್ಕೆ ಹಸ್ತಾಂತರವಾದ ನಂತರ ಅಲ್ಲಿ ನಿಯಮಾನುಸಾರ ನಿಗಮದಿಂದ ಹೊಸ ಕೈಗಾರಿಕಾ ವಸಾಹತು ಸ್ಥಾಪಿಸಲು ಅಗತ್ಯ ಕ್ರಮ ಜರುಗಿಸಲಾಗುವುದು. |

ಸಿಐ 122 ಸಿಎಸ್‌ಸಿ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

ಸಂಖ್ಯೆ :DPAR 108 RASA 2020

ಕರ್ನಾಟಕ ಸರ್ಕಾರ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:25.09.2020

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ವಿಧಾನ ಸೌಧ, ಬೆಂಗಳೂರು

U/S
29/9/2020

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೇ,**

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೃಷ್ಣಾರೆಡ್ಡಿ ಎಂ (ಚಿಂತಾಮಣಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1833 ಕ್ಕೆ ಉತ್ತರ ನೀಡುವ ಕುರಿತು.

ಉಲ್ಲೇಖ: ತಮ್ಮ ಅ.ಸ.ಪ.ಸಂ: ಎಲ್‌ಸಿಕ್ಯೂ/1833/141ನೇಅ/2020, ದಿನಾಂಕ: 18.09.2020

<<<<<>>>>>

ಉಲ್ಲೇಖಿತ ಅರೆ ಸರ್ಕಾರಿ ಪತ್ರದಲ್ಲಿ ಕೋರಿರುವಂತೆ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೃಷ್ಣಾರೆಡ್ಡಿ ಎಂ (ಚಿಂತಾಮಣಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1833ಕ್ಕೆ ಸಂಬಂಧಪಟ್ಟಂತೆ ಉತ್ತರವನ್ನು ತಯಾರಿಸಿ, ಸದರಿ ಉತ್ತರದ 15 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

V. Akkamahadevi 25/9/2020
(ವಿ. ಅಕ್ಕಮಹಾದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಿಆಸುಇ (ರಾಜಕೀಯ)

9

<u>ಕರ್ನಾಟಕ ವಿಧಾನ ಸಭೆ</u>

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1833
2. ಸದಸ್ಯರ ಹೆಸರು : ಶ್ರೀ.ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ)
3. ಉತ್ತರಿಸಬೇಕಾದ ದಿನಾಂಕ : 29.09.2020
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಸರ್ಕಾರದ ಲಾಂಛನವನ್ನು ರೂಪಿಸಿ ಹ್ಯೂಮನ್ ರಿಲಿವೆಂಟ್ ಇನ್ಸಿಟ್ಯೂಟ್ ಸಂಸ್ಥೆಯವರು ಸರ್ಕಾರಕ್ಕೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಆ) | ಬಂದಿದ್ದಲ್ಲಿ, ಹ್ಯೂಮನ್ ರಿಲಿವೆಂಟ್ ಇನ್ಸಿಟ್ಯೂಟ್ ಸಂಸ್ಥೆಯವರು ತಯಾರು ಮಾಡಿರುವ ಲಾಂಛನದ ಶ್ರಮಕ್ಕೆ ಪ್ರತಿಯಾಗಿ ಗೌರವಧನ ನೀಡಲು ಸಲ್ಲಿಸಿರುವ ಪ್ರಸ್ತಾವನೆ ಕುರಿತು ಕೈಗೊಂಡ ಕ್ರಮಗಳೇನು; | ದಿನಾಂಕ: 05.10.1950 ರಲ್ಲಿ ರಾಜ್ಯ ಸರ್ಕಾರದ ಲಾಂಛನವನ್ನು ಅಳವಡಿಸಿಕೊಳ್ಳಲಾಗಿದ್ದು, ಶ್ರೀ.ರವೀಂದ್ರನಾಥ್, ಸಮಾಜ ವಿಜ್ಞಾನಿ, ಹ್ಯೂಮನ್ ರೆಲೆವಂಟ್ ಇನ್ಸಿಟ್ಯೂಟ್ ಸಂಸ್ಥೆ ರವರು ರಾಜ್ಯ ಲಾಂಛನದ ಅಪಬಳಕೆ ತಡೆ ಕುರಿತಂತೆ ಮಾತ್ರ ಸಲಹೆ/ ಸೂಚನೆಗಳನ್ನು ನೀಡಿದ್ದು, ಹೊಸದಾಗಿ ಲಾಂಛನವನ್ನು ರೂಪಿಸಿರುವುದಿಲ್ಲ. ಆದ್ದರಿಂದ, ಹ್ಯೂಮನ್ ರೆಲೆವಂಟ್ ಇನ್ಸಿಟ್ಯೂಟ್ ಸಂಸ್ಥೆಗೆ ಯಾವುದೇ ಗೌರವಧನ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ) | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಗೌರವಧನ ನೀಡಲಾಗುವುದು? (ವಿವರ ನೀಡುವುದು) | ಅನ್ವಯಿಸುವುದಿಲ್ಲ |

ಸಂಖ್ಯೆ. ಸಿಆಸುಇ 108 ರಾಸಾ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿಗಳು

**ಕರ್ನಾಟಕ ಸರ್ಕಾರ**

ಸಂಖ್ಯೆ: ಮೂಅಇ 119 ರಾರಾಹೆ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:28.09.2020

ಇವರಿಂದ,
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ, ಬಂದರುಗಳು
ಒಳನಾಡು ಮತ್ತು ಜಲಸಾರಿಗೆ ಇಲಾಖೆ,
ಬೆಂಗಳೂರು.

29/9/2020

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಪಾಟೀಲ್ ಎಂ.ವೈ. (ಅಫ್ಜಲ್‌ಪುರ್) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1840 ಕ್ಕೆ ಉತ್ತರ ಒದಗಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಪಾಟೀಲ್ ಎಂ.ವೈ. (ಅಫ್ಜಲ್‌ಪುರ್) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1840 ಕ್ಕೆ ಸಂಬಂಧಿಸಿದ 25 ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ಚಂದ್ರಕಲಾ.ಎಸ್.ಎನ್)**
ಸರ್ಕಾರದ ಅಧೀನ ಕಾರ್ಯದರ್ಶಿ–1 (ಪ್ರ),
ಮೂಲಸೌಲಭ್ಯ ಅಭಿವೃದ್ಧಿ, ಬಂದರುಗಳು
ಒಳನಾಡು ಮತ್ತು ಜಲಸಾರಿಗೆ ಇಲಾಖೆ.

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1840
2) ಸದಸ್ಯರ ಹೆಸರು : ಶ್ರೀ ಪಾಟೀಲ್ ಎಂ.ವೈ (ಅಫ್ಜಲ್ ಪುರ)
3) ಉತ್ತರಿಸಬೇಕಾದ ದಿನಾಂಕ : 29.09.2020
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ | ಪ್ರಶ್ನೆ | ಉತ್ತರ |
| --- | --- | --- |
| ಅ) | ಅಫಜಲಪೂರ ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ ಜೌರಾದ್ ಸದಾಶಿವಘಡ ರಸ್ತೆಯ ಕುಲಾಲಿ ಗ್ರಾಮದ ಹತ್ತಿರ ರೈಲ್ವೆ ಮೇಲು ಸೇತುವೆ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಅಫಜಲಪೂರ ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ ಜೌರಾದ್ ಸದಾಶಿವಘಡ ರಸ್ತೆಯ ಕುಲಾಲಿ ಗ್ರಾಮದ ಹತ್ತಿರ ರೈಲ್ವೆ ಮೇಲು ಸೇತುವೆ ನಿರ್ಮಾಣ ಮಾಡುವ ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. |
| ಆ) | ಹಾಗಿದಲ್ಲಿ, ಇಲ್ಲಿ ರೈಲ್ವೆ ಹಳಿಯ ಮೇಲೆ ಮೇಲು ಸೇತುವೆ ನಿರ್ಮಾಣ ಮಾಡಲು ಹಾಗೂ ನೀಲೂರು ಗ್ರಾಮದ ರೈಲ್ವೆ ಹಳಿಯ ಕೆಳ ಸೇತುವೆಯನ್ನು ಅಗಲೀಕರಣ ಮಾಡಿ ಸಾರ್ವಜನಿಕರ ಸುಗಮ ಸಂಚಾರಕ್ಕೆ ಅನುಕೂಲ ಮಾಡಿಕೊಡಲು ಸರ್ಕಾರವು ಯಾವ ಕಾಲಮಿತಿಯೊಳಗೆ ಈ ಕಾಮಗಾರಿಯನ್ನು ಪ್ರಾರಂಭ ಮಾಡಲು ಕಾರ್ಯಾದೇಶ ನೀಡುವುದು? | ಅನ್ವಯಿಸುವುದಿಲ್ಲ |

ಸಂಖ್ಯೆ:ಮೂಅಇ 119 ರಾರಾಹೆ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 197 ಎಂಎನ್‌ವೈ/2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 26-09-2020.

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ / ~~ವಿಧಾನ ಪರಿಷತ್ತಿನ~~ ಸಚಿವಾಲಯ
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭಾ / ~~ಪರಿಷತ್ತಿನ~~ ಸದಸ್ಯರಾದ ಶ್ರೀ ರಿಜ್ವಾನ್ ಅರ್ಷದ್. ಎಂ ಇವರು ಮಂಡಿಸಿರುವ ಚುಕ್ಕೆ ಗುರುತಿನ / ~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: 1878 ಕ್ಕೆ ಉತ್ತರ ನೀಡುವ ಬಗ್ಗೆ.

* * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ/ ~~ಪರಿಷತ್ತಿನ~~ ಸದಸ್ಯರಾದ ಶ್ರೀ ಎಂ. ರಿಜ್ವಾನ್ ಅರ್ಷದ್ ಇವರು ಮಂಡಿಸಿರುವ ಚುಕ್ಕೆ ಗುರುತಿನ / ~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: ಕ್ಕೆ ಸರ್ಕಾರದ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಲಕ್ಷ್ಮೀ ಸಾಗರ್ ಎನ್.ಕೆ.)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಬಿ.ಬಿ.ಎಂ.ಪಿ.)

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1878
2. ಸದಸ್ಯರ ಹೆಸರು : ಶ್ರೀ ಸತೀಶ್‌ರೆಡ್ಡಿ ಎಂ. (ಬೊಮ್ಮನಹಳ್ಳಿ)
3. ಉತ್ತರಿಸುವ ದಿನಾಂಕ : 29-09-2020
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಬೇಗೂರು ರಸ್ತೆ ಅಗಲೀಕರಣ ಕಾಮಗಾರಿಗೆ ಈಗಾಗಲೇ ಅಧಿಸೂಚನೆ ಹೊರಡಿಸಿದ್ದರೂ ಅನುದಾನವನ್ನು ಮೀಸಲಿಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಬೇಗೂರು ರಸ್ತೆಯನ್ನು ಪರಿಷ್ಕೃತ ಮಹಾನಕ್ಷೆ 2015 ರಂತೆ 24.00 ಮೀಟರ್‌ಗಳಿಗೆ ಅಗಲೀಕರಣಗೊಳಿಸುವ ಕಾಮಗಾರಿಗೆ 2017-18ನೇ ಸಾಲಿನ "ವಿಶೇಷ ಬಂಡವಾಳ ಬೆಂಬಲ ಯೋಜನೆ" ಅನುದಾನದ ಅನುಬಂಧ-7ರ ಕ್ರಮ ಸಂಖ್ಯೆ: 15 ರಲ್ಲಿ ರೂ.15.00 ಕೋಟಿಗಳನ್ನು ಮತ್ತು 2018-19ನೇ ಸಾಲಿನ "ಮುಖ್ಯಮಂತ್ರಿಗಳ ನವ ನಗರೋತ್ಥಾನ ಯೋಜನೆ"ಯಡಿ ಅನುಮೋದನೆಯಾಗಿರುವ ಕ್ರಿಯಾ ಯೋಜನೆಯ ಅನುಬಂಧ-2ರ ಕ್ರಮ ಸಂಖ್ಯೆ: 1040 ರಲ್ಲಿ ಹೆಚ್ಚುವರಿಯಾಗಿ ರೂ.35.00 ಕೋಟಿಗಳು ಹೀಗೆ ಒಟ್ಟು ರೂ.50.00 ಕೋಟಿಗಳ ಅನುದಾನ ವನ್ನು ಸರ್ಕಾರವು ಬೇಗೂರು ರಸ್ತೆ ಅಗಲೀಕರಣ ಕಾಮಗಾರಿಗೆ ಹಂಚಿಕೆ ಮಾಡಿರುತ್ತದೆ. (ಸರ್ಕಾರವು ಅನುದಾನ ಹಂಚಿಕೆ ಮಾಡಿ ಆದೇಶ ಹೊರಡಿಸಿರುವ ಆದೇಶಗಳ ಪ್ರತಿಗಳನ್ನು ಅನುಬಂಧ-01 ಮತ್ತು ಅನುಬಂಧ-02 ರಲ್ಲಿ ನೀಡಲಾಗಿದೆ) |
| ಆ | ಹಾಗಿದ್ದಲ್ಲಿ, ಸದರಿ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆಯೇ; ಹಾಗಿದ್ದಲ್ಲಿ ಟೆಂಡರ್ ಯಾವ ಹಂತದಲ್ಲಿದೆ; ಟೆಂಡರ್‌ನಲ್ಲಿ ಎಷ್ಟು ಜನರು ಭಾಗವಹಿಸಿದ್ದಾರೆ ಹಾಗೂ ನಮೂದಿಸಿರುವ ಟೆಂಡರ್ ಮೊತ್ತ ಎಷ್ಟು; | ಬೇಗೂರು ರಸ್ತೆ ಅಗಲೀಕರಣ ಕಾಮಗಾರಿಗೆ ಟೆಂಡರ್ ಕರೆಯಲಾಗಿದ್ದು, ಸದರಿ ಟೆಂಡರ್‌ನಲ್ಲಿ 3 ಜನ ಗುತ್ತಿಗೆದಾರರು ಭಾಗವಹಿಸಿದ್ದು, ಅವರಲ್ಲಿ ಇಬ್ಬರು ಗುತ್ತಿಗೆದಾರರು ತಾಂತ್ರಿಕ ಬಿಡ್‌ನಲ್ಲಿ ಅರ್ಹರಾಗಿದ್ದು, ಈ ಇಬ್ಬರು ಬಿಡ್‌ದಾರರು ನಮೂದಿಸಿರುವ ಟೆಂಡರ್ ಮೊತ್ತವು ಈ ಕೆಳಕಂಡಂತಿರುತ್ತದೆ.<br><br>ಶ್ರೀ ಎ. ಚೆನ್ನಾರೆಡ್ಡಿ (ಮೆ॥ ಎ.ಸಿ.ಆರ್ ಪ್ರಾಜೆಕ್ಟ್ಸ್) ರವರು ರೂ.48,50,46,473.35 (ಶೇ.12% ರಷ್ಟು ಜಿಎಸ್‌ಟಿ ತೆರಿಗೆ ಹೊರತುಪಡಿಸಿ) ಮತ್ತು ಶ್ರೀ ಎಂ.ಎಸ್. ವೆಂಕಟೇಶ್ (ಮೆ॥ ಎಂ.ಎಸ್.ವಿ ಕನ್‌ಸ್ಟ್ರಕ್ಷನ್ಸ್ ಕಂಪನಿ) ರವರ ರೂ.55,23,54,327.15 (ಶೇ.12% ರಷ್ಟು ಜಿಎಸ್‌ಟಿ ತೆರಿಗೆ ಹೊರತುಪಡಿಸಿ) ಗಳ ಮೊತ್ತ ನಮೂದಿಸಿರುತ್ತಾರೆ.<br><br>ಅದರಂತೆ, ಸರ್ಕಾರದ ಆದೇಶ ಸಂಖ್ಯೆ: ನಅಇ 122 ಎಂಎನ್‌ವೈ 2019, ದಿನಾಂಕ: 13-01-2020 ರನ್ವಯ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ಮತ್ತು ಟೆಂಡರ್‌ಗೆ ಅನುಮೋದನೆ ನೀಡಲಾಗಿರುತ್ತದೆ. |

| | | |
|---|---|---|
| ಇ | ಕಾಮಗಾರಿಯನ್ನು ಯಾವ ಸಂಸ್ಥೆಗೆ ಟೆಂಡರ್ ನೀಡಲಾಗಿದೆ; ಕಾಮಗಾರಿ ಪ್ರಾರಂಭಕ್ಕೆ ಯಾವ ಕ್ರಮ ಕೈಗೊಳ್ಳಲಾಗಿದೆ? | ಸರ್ಕಾರದ ಆದೇಶ ಸಂಖ್ಯೆ: ನಅಇ 122 ಎಂಎನ್‌ವೈ 2019, ದಿನಾಂಕ: 13-01-2020ರ ಆದೇಶದಂತೆ ಬೇಗೂರು ರಸ್ತೆ ಅಗಲೀಕರಣ ಕಾಮಗಾರಿಯ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿ, ಕನಿಷ್ಠ ದರ ನಮೂದಿಸಿದ ಬಿಡ್‌ದಾರರಾದ ಶ್ರೀ ಎ. ಚೆನ್ನಾರೆಡ್ಡಿ (ಮೆ॥ ಎ.ಸಿ.ಆರ್ ಪ್ರಾಜೆಕ್ಟ್ಸ್) ರವರು ನಮೂದಿಸಿರುವ ಬಿಡ್ ಮೊತ್ತವನ್ನು ಟೆಂಡರ್‌ಗಿಟ್ಟ ಮೊತ್ತ ರೂ.44,90,68,394.62 ಗಳಿಗೆ ಹೋಲಿಸಿದಾಗ ಶೇ.5ರಷ್ಟು (ಅನ್ವಯವಾಗುವ ಎಲ್ಲಾ ತೆರಿಗೆ ಸೇರಿದಂತೆ) ಅಂದರೆ, ರೂ.47,15,21,814.40 ಗಳಿಗೆ ಮಿತಿಗೊಳಿಸಿ ಟೆಂಡರ್‌ಗೆ ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ. (ಟೆಂಡರ್‌ಗೆ ಅನುಮೋದನೆ ನೀಡಿರುವ ಆದೇಶದ ಪ್ರತಿಯನ್ನು ಅನುಬಂಧ-3 ರಲ್ಲಿ ನೀಡಲಾಗಿದೆ.)<br><br>ಅದರಂತೆ, ಬಿಬಿಎಂಪಿ ವತಿಯಿಂದ ಗುತ್ತಿಗೆದಾರರೊಂದಿಗೆ ದಿನಾಂಕ: 15-04-2020 ರಂದು ಗುತ್ತಿಗೆ ಕರಾರು ಮಾಡಿಕೊಂಡು ಕಾರ್ಯಾದೇಶ ನೀಡಲಾಗಿರುತ್ತದೆ.<br><br>ಪ್ರಸ್ತುತ ಸರಪಳಿ 0.00 ಕಿ.ಮೀ ನಿಂದ 2.125 ಕಿ.ಮೀ ವರೆಗೆ ಒಟ್ಟು 257 ಖಾಸಗಿ ಸ್ವತ್ತುಗಳಿಗೆ ಮತ್ತು ಸರಪಳಿ 2.125 ಕಿ.ಮೀ ನಿಂದ 3.40 ಕಿ.ಮೀ ವರೆಗೆ ಒಟ್ಟು 112 ಖಾಸಗಿ ಸ್ವತ್ತುಗಳಿಗೆ ಟಿ.ಡಿ.ಆರ್ ನಿಯಮಗಳನ್ವಯ ಭೂ-ಸ್ವಾಧೀನಕ್ಕೆ ಅಧಿಸೂಚನೆ ಹೊರಡಿಸಲಾಗಿರುತ್ತದೆ.<br><br>ಆದರೆ, ಖಾಸಗಿ ಭೂ-ಮಾಲೀಕರು ಟಿ.ಡಿ.ಆರ್ ಯೋಜನೆಗೆ ಆಸಕ್ತಿಯನ್ನು ತೋರಿಸದೆ, ಹಣದ ರೂಪದ ಭೂ ಪರಿಹಾರವನ್ನು ಕೋರುತ್ತಿರುವ ಹಿನ್ನೆಲೆಯಲ್ಲಿ ಕಾಮಗಾರಿ ಪ್ರಾರಂಭಿಸಲು ವಿಳಂಬ ಉಂಟಾಗಿದ್ದು, ಹಣದ ರೂಪದಲ್ಲಿ ಭೂ ಪರಿಹಾರವನ್ನು ನೀಡಿದ ಪಕ್ಷದಲ್ಲಿ ಸರ್ಕಾರ / ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮೇಲೆ ಹೆಚ್ಚಿನ ಆರ್ಥಿಕ ಹೊರೆ ಉಂಟಾಗುತ್ತದೆ. ಆದುದರಿಂದ, ಭೂಮಾಲೀಕರೊಂದಿಗೆ ಹೆಚ್ಚಿನ ಸಭೆಗಳನ್ನು ನಡೆಸಿ ಮನವೊಲಿಸಲು ಪ್ರಯತ್ನಿಸಲಾಗುತ್ತಿದೆ. ಭೂಸ್ವಾಧೀನಕ್ಕೆ ಅನುಗುಣವಾಗಿ ಹಂತ ಹಂತವಾಗಿ ಬೇಗೂರು ರಸ್ತೆ ಅಗಲೀಕರಣ ಕಾಮಗಾರಿಯನ್ನು ಶೀಘ್ರದಲ್ಲಿ ಪ್ರಾರಂಭಿಸಲು ಕ್ರಮ ವಹಿಸಲಾಗುತ್ತಿದೆ. |

**ಸಂಖ್ಯೆ: ನಅಇ 197 ಎಂಎನ್‌ವೈ 2020**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಅನುಬಂಧ-1

ಸರ್ಕಾರದ ಆದೇಶ ಸಂಖ್ಯೆ: ನಅಇ 185 ಎಂಎನ್‌ವೈ 2017, ದಿನಾಂಕ: 26-12-2017

ಅನುಬಂಧ-7

## Traffic Engineering works

| ಕ್ರ. ಸಂ | ಕಾಮಗಾರಿಯ ಹೆಸರು | 2017-18ನೇ ಸಾಲಿಗೆ ಬೇಕಾಗುವ ಅನುದಾನ (ರೂ. ಕೋಟಿಗಳಲ್ಲಿ) |
|---|---|---|
| 1 | Road safety works, Lane Markings, Signage's, junction Markings, Road Medians and Kerb painting, hazard Boards, Median markers. | 10.00 |
| 2 | Providing Pedestrian Safety works such as High Raised pedestrian Crossings, Scientific Road Humps, Pelican Signals. | 8.00 |
| 3 | Junction Improvement works in BBMP Limits | 10.00 |
| 4 | Providing 'U' Turns at critical mid junction blocks for avoiding congestion at junctions. | 10.00 |
| 5 | Pot holes filling in Arterial and Sub Arterial Roads by Mechanical Equipment | 10.00 |
| 6 | Providing resurfacing and damaged stretches of Arterial and Sub Arterial Roads in Core Zones | 6.00 |
| 7 | Providing resurfacing and damaged stretches of Arterial and Sub Arterial Roads in Outer Zones | 6.00 |
| 8 | Development of Non-Motorised Transit Infrastructure in Bangalore City (Cycle Lane) | 18.00 |
| 9 | Construction of link road from Outer Ring road to Kurubarahalli along BWSSB pipeline road Phase-I | 12.00 |
| 10 | Widening of Padarayanapura main road from Binny Mill road (Tank bund Road) to Vijayanagara Pipe line road (Total project Cost Rs.65.00 cr) | 10.00 |
| 11 | Comprehensive development of roads and drains at Kaveripura, Ranganathapura and Pattegarpalya | 10.00 |
| 12 | Comprehensive development of roads and drains at Ranganathapura, Srinivasnagar, Kanakanagar and Panchasriranganagara | 10.00 |
| 13 | Providing and Installation of Surveillance Cameras in selected Arterial and Sub-Arterial roads | 30.00 |

| | | |
|---|---|---|
| 14 | Construction of roads and drains at Mico Layout, Vishwapriya Layout, Akshayanagara, Subhash Nagaram Basapura, Basavanapura, Chikkakammanahalli, Doddakammanahalli of Ward No.192. | 35.00 |
| 15 | Widening of Begur road | 15.00 |
| | Total | 200.00 |

(ಕೆ. [illegible])
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಬಿ.ಬಿ.ಎಂ.ಪಿ.)

# ಅನುಬಂಧ-2

ಸರ್ಕಾರದ ಆದೇಶ ಸಂಖ್ಯೆ: ನಅಇ 375 ಎಂಎನ್‌ವೈ 2018, ದಿನಾಂಕ: 20-09-2019ರ ಅನುಬಂಧ

| Sl No | Type | Ward No | Name of the work | Amount (Rs in Lakhs) |
|---|---|---|---|---|
| 1032 | | | *Improvements to drain, asphalting to road from Tyappa garden (Indian oil petrol bunk) via Krishna kuttera hotel up to hulimavu -Begur Road junction in ward No:193.* | 200.00 |
| 1033 | | | *Improvements to drain,asphalting to road from Garve bhavi playa via Bandepalya Govt school Main Road up to hosapalya bus stop in ward No:190.* | 175.00 |
| 1034 | | | *Improvements to drain, asphalting to road from kudlu road to via hospalya and mangammanapalya up to hosur Road in ward No:190.* | 175.00 |
| 1035 | | | *Improvements to drain, asphalting to road from 27th main road, HSR somasundrapalya cricle Mangammanapalya main road in ward No:190* | 200.00 |
| 1036 | | | *Improvements to drain, asphalting to road from central silk board junction up to BBMP limit in Hosur Road in ward No:174* | 150.00 |
| 1037 | | | *Resurfacing and Repair to Flyover at 14th main HSR and Agara junction on ORR* | 300.00 |
| 1038 | | | *Improvements to drain, asphalting to road of singasandra main Road from kudlu main road to kalanikethan school in AECS layout in ward No:191* | 180.00 |
| 1039 | | | *Comprehensive Development of Major Roads in ward No. 187, 188 and 193 in Bommanahalli Constituency* | 2000.00 |
| 1040 | | | *Additional grants for widening of Begur Main Road* | 3500.00 |
| 1041 | | | *Comprehensive Development of Major Roads in ward No. 175 in Bommanahalli Constituency* | 1000.00 |
| 1042 | | | *Comprehensive developement of road and drain works in Kagadasapura area of Ward No 57 of BBMP.* | 730.00 |
| 1043 | | | *Comprehensive developement of road and drain works in Malleshanapalya area of Ward No 57 of BBMP.* | 800.00 |
| 1044 | | | *Comprehensive developement of road and drain works in Bhuvaneshwarinagar and Suddguntepalya area of Ward No 57 of BBMP.* | 800.00 |
| 1045 | | | *Comprehensive developement of road and drain works in Nagawarapalya area of Ward No 57 of BBMP.* | 800.00 |
| 1046 | | | *Comprehensive developement of road and drain works in Maruthi Nagar and surrounding area of Ward No 57 of BBMP.* | 800.00 |
| 1047 | | | *Comprehensive developement of road and drain works in Benniganahalli, Ward No 50 of BBMP.* | 3000.00 |
| 1048 | | | *Comprehensive developement of road and drain works in New Thippasandra, Ward No 58 of BBMP.* | 3000.00 |

[illegible]
ಸರ್ಕಾರದ ಅಧೀನ ಕಾರ್ಯದರ್ಶಿ-3
ನಗರಾಭಿವೃದ್ಧಿ ಇಲಾಖೆ

# ಅನುಬಂಧ-3

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** 2016-17 ಮತ್ತು 2017-18ನೇ ಸಾಲಿನಲ್ಲಿ ವಿಶೇಷ ಮೂಲಭೂತ ಸೌಕರ್ಯಕ್ಕೆ ಬಂಡವಾಳ ಬೆಂಬಲ ಯೋಜನೆಯಡಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೈಗೊಳ್ಳುವ "Widening of Begur Road from Ch: 0m to Ch: 3250m (Phase 1)"ರ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ಹಾಗೂ ಟೆಂಡರ್ ಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ನಅಇ 185 ಎಂಎನ್‌ವೈ 2017, ದಿನಾಂಕ: 26-12-2017.
2. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಪತ್ರ ಸಂಖ್ಯೆ: ಮು.ಅ/ರ.ಮೂ.ಸೌ/ಪಿಆರ್/1199/2019-20, ದಿನಾಂಕ: 05-08-2019.
3. ಸರ್ಕಾರದ ಆದೇಶ ಸಂಖ್ಯೆ: ನಅಇ 375 ಎಂಎನ್‌ವೈ 2018, ದಿನಾಂಕ: 20-09-2019.
4. ದಿನಾಂಕ: 04-11-2019 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿ.

* * * * *

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 26-12-2017ರ ಆದೇಶದಲ್ಲಿ, 2017-18ನೇ ಸಾಲಿನಲ್ಲಿ ಬೆಂಗಳೂರಿಗೆ ವಿಶೇಷ ಮೂಲಭೂತ ಸೌಕರ್ಯಕ್ಕೆ ಬಂಡವಾಳ ಬೆಂಬಲ ಯೋಜನೆಯಡಿ ಒದಗಿಸಿರುವ ರೂ.2191.00 ಕೋಟಿಗಳ ಅನುದಾನದಲ್ಲಿ ಕೈಗೊಳ್ಳುವ ಕಾಮಗಾರಿಗಳ ಕ್ರಿಯಾ ಯೋಜನೆಗೆ ಕೆಲವೊಂದು ಷರತ್ತುಗಳನ್ನು ವಿಧಿಸಿ ಅನುಮೋದನೆ ನೀಡಲಾಗಿದ್ದು, ಅನುಬಂಧ-7ರ ಕ್ರಮ ಸಂಖ್ಯೆ: 15 ರಲ್ಲಿ "Widening of Begur Road"ನ ಕಾಮಗಾರಿಗೆ ರೂ.15.00 ಕೋಟಿಗಳ ಅನುದಾನವನ್ನು ನಿಗಧಿಪಡಿಸಲಾಗಿರುತ್ತದೆ.

2. ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 05-08-2019ರ ಪ್ರಸ್ತಾವನೆಯಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು, ಸರ್ಕಾರದ ಆದೇಶ ಸಂಖ್ಯೆ ನಅಇ 185 ಎಂಎನ್ ವೈ 2017, ದಿನಾಂಕ: 26-12-2017 ರಲ್ಲಿ 2017-18ನೇ ಸಾಲಿನಲ್ಲಿ ಬೆಂಗಳೂರಿಗೆ ವಿಶೇಷ ಮೂಲಭೂತ ಸೌಕರ್ಯಕ್ಕೆ ಬಂಡವಾಳ ಬೆಂಬಲ ಯೋಜನೆಯಡಿ ಮಂಜೂರಾಗಿರುವ ಕಾಮಗಾರಿಗಳನ್ನು ಕೈಗೊಳ್ಳಲು ದಿನಾಂಕ: 01-02-2019 ರಂದು ದ್ವಿ-ಲಕೋಟೆ ಪದ್ಧತಿಯಲ್ಲಿ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ಅನ್ನು ಆಹ್ವಾನಿಸಲಾಗಿರುತ್ತದೆ. ಟೆಂಡರ್ ಅನ್ನು ಸಲ್ಲಿಸಲು ದಿನಾಂಕ: 08-03-2019 ರಂದು ನಿಗಧಿಪಡಿಸಲಾಗಿರುತ್ತದೆ.

...2.

3. ಸದರಿ ಟೆಂಡರ್ ನಲ್ಲಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು, ಗುತ್ತಿಗೆದಾರರು ಸಲ್ಲಿಸಿರುವ ದಾಖಲೆಗಳನ್ವಯ ದಿನಾಂಕ: 13-06-2019ರ ತಾಂತ್ರಿಕ ಮೌಲ್ಯಮಾಪನ ಸಮಿತಿ ಸಭೆಯ ನಡುವಳಿಯ ತೀರ್ಮಾನದಂತೆ ಆರ್ಥಿಕ ಬಿಡ್‌ನ್ನು ದಿನಾಂಕ: 19-06-2019 ರಂದು ತೆರೆಯಲಾಗಿದ್ದು, ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ತಾಂತ್ರಿಕ ಮೌಲ್ಯಮಾಪನದಲ್ಲಿ ಅರ್ಹರಾದ ಗುತ್ತಿಗೆದಾರರು | ಟೆಂಡರ್‌ಗಿಟ್ಟ ಮೊತ್ತ (2018-19ನೇ ಸಾಲಿನ ಲೋ.ಇ. ದರಪಟ್ಟಿ ದರಗಳಂತೆ (ರೂ. ಗಳಲ್ಲಿ) | 2018-19ನೇ ಸಾಲಿನ ದಿ:01.01.2019ರ ಪರಿಷ್ಕೃತ ದರಗಳಂತೆ (ರೂ.ಗಳಲ್ಲಿ) | ಟೆಂಡರ್‌ನಲ್ಲಿ ನಮೂದಿಸಿರುವ ಮೊತ್ತ (ರೂ.ಗಳಲ್ಲಿ) | ಮಂಜೂರಾದ ದರಗಳಿಗೆ ಹೋಲಿಸಿದಾಗ ಶೇಕಡವಾರು | ಪ್ರಸಕ್ತ ಚಾಲ್ತಿ ದರಗಳಿಗೆ ಹೋಲಿಸಿದಾಗ ಶೇಕಡವಾರು |
|---|---|---|---|---|---|---|
| 1 | Sri.A. ChennaReddy (ACR projects ) | 44,90,68,394.62 | 43,95,32,088.56 | 48,50,46,473.35 | ಶೇ.8.01% ಹೆಚ್ಚು | ಶೇ.10.36% ಹೆಚ್ಚು (ಎಲ್-1) |
| 2 | Sri.M.S. Venkatesh (MSV Constructions Company) | | | 55,23,54,327.15 | ಶೇ.23.00% ಹೆಚ್ಚು | ಶೇ.25.66% ಹೆಚ್ಚು (ಎಲ್-2) |

4. ಮೇಲ್ಕಂಡ ಟೆಂಡರ್‌ನಲ್ಲಿ ಎಲ್-1 ಬಿಡ್‌ದಾರರಾದ Sri.A. Chenna Reddy (ACR projects) ರವರು ರೂ.48,50,46,473.35 ಗಳ ಮೊತ್ತವನ್ನು ನಮೂದಿಸಿದ್ದು (ಶೇಕಡ 12% ರಷ್ಟು ಜಿ.ಎಸ್.ಟಿ. ತೆರಿಗೆ ಹೊರತುಪಡಿಸಿ), ಮಂಜೂರಾದ ದರಗಳಿಗೆ ಹೋಲಿಸಿದಾಗ ಶೇಕಡ 8.01% ರಷ್ಟು ಹೆಚ್ಚು ಮತ್ತು ದಿನಾಂಕ: 01-01-2019ರ ಪರಿಷ್ಕೃತ ಪ್ರಸಕ್ತ ಚಾಲ್ತಿ ದರಗಳಿಗೆ ಹೋಲಿಸಿದಾಗ ಶೇಕಡ 10.36% ರಷ್ಟು ಹೆಚ್ಚು ದರವಾಗಿದ್ದ ಹಿನ್ನೆಲೆಯಲ್ಲಿ ಈ ಬಗ್ಗೆ ಚರ್ಚಿಸಿ, ಗುತ್ತಿಗೆದಾರರಾದ Sri A. Chenna Reddy ರವರೊಂದಿಗೆ ದರಸಂಧಾನ ಕೈಗೊಂಡು ಟೆಂಡರ್‌ನಲ್ಲಿ ನಮೂದಿಸಿರುವ ದರಗಳನ್ನು ಕಡಿಮೆ ಮಾಡಲು ಸೂಚಿಸಿದ್ದರ ಮೇರೆಗೆ ಗುತ್ತಿಗೆದಾರರು ಮೇಲ್ಕಂಡ ಕಾಮಗಾರಿಯು ರಸ್ತೆ ಅಗಲೀಕರಣ ಕಾಮಗಾರಿಯಾಗಿದ್ದು, ತಾವು ಮಾರುಕಟ್ಟೆ ದರಗಳಿಗೆ ಅನುಗುಣವಾಗಿ ಟೆಂಡರ್ ನಲ್ಲಿ ದರಗಳನ್ನು ನಮೂದಿಸಿರುವುದಾಗಿ ಮತ್ತು ಹೆಚ್ಚಿಗೆ ಮೊತ್ತವನ್ನು ನಮೂದಿಸಿ ತದನಂತರ ಕಡಿಮೆಗೊಳಿಸುವ ಪ್ರವೃತ್ತಿಯನ್ನು ಹೊಂದಿರುವುದಿಲ್ಲವೆಂದು ಹಾಗೂ ಈ ಹಿಂದಿನ ಕೆಲವು ರಸ್ತೆ ಅಗಲೀಕರಣ ಕಾಮಗಾರಿಗಳಿಗೆ ಶೇ.12 ರಿಂದ ಶೇ.15 ರವರೆಗೂ ಸ್ಥಳ ಹಾಗೂ ಕಾಮಗಾರಿಯ ಅನುಗುಣವಾಗಿ ದರಗಳನ್ನು ಸಲ್ಲಿಸುತ್ತಿರುವ ವಿಷಯವನ್ನು ತಿಳಿಸಿ, ತಮ್ಮ ಸೂಚನೆಯ ಮೇರೆಗೆ ಹಾಲಿ ನಮೂದಿಸಿರುವ ರೂ.48,50,46,473.35 (ಶೇಕಡ 12% ರಷ್ಟು ಜಿ.ಎಸ್.ಟಿ. ತೆರಿಗೆ ಹೊರತುಪಡಿಸಿ) ಗಳ ಬದಲಾಗಿ ರೂ.48,32,65,000.00(ಶೇಕಡ 12% ರಷ್ಟು ಜಿ.ಎಸ್.ಟಿ. ತೆರಿಗೆ ಹೊರತುಪಡಿಸಿ) ಗಳಿಗೆ ಸಂಧಾನಿತ ದರ ಸಲ್ಲಿಸಿರುತ್ತಾರೆ.

5. ಸದರಿ ಸಂಧಾನಿತ ಮೊತ್ತ ರೂ.48,32,65,000.00 (ಶೇಕಡ 12% ರಷ್ಟು ಜಿ.ಎಸ್.ಟಿ. ತೆರಿಗೆ ಹೊರತುಪಡಿಸಿ) ಗಳನ್ನು ಮಂಜೂರಾದ ದರಗಳಿಗೆ ಹೋಲಿಸಿದಾಗ ಶೇ.7.62% ರಷ್ಟು ಹೆಚ್ಚು ಮತ್ತು ದಿನಾಂಕ: 01-01-2019ರ ಪರಿಷ್ಕೃತ ಪ್ರಸಕ್ತ ಚಾಲ್ತಿ ದರಗಳಿಗೆ ಹೋಲಿಸಿದಾಗ ಶೇಕಡ

9.95% ರಷ್ಟು ಹೆಚ್ಚು ಬರಲಾಗಿದ್ದು, ಈ ಬಗ್ಗೆ ತೀರ್ಮಾನ ಕೈಗೊಳ್ಳಲು ಸರ್ಕಾರದ ಮಟ್ಟದಲ್ಲಿ ರಚಿತವಾಗಿರುವ ಅಧಿಕಾರಯುಕ್ತ ಸಮಿತಿಯ ಮುಂದೆ ಮಂಡಿಸುವುದು ಸೂಕ್ತವೆಂದು ಸರ್ವಾನುಮತದಿಂದ ತೀರ್ಮಾನಿಸಲಾಗಿದ್ದು, ಕಾಮಗಾರಿಯ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ಹಾಗೂ ಟೆಂಡರ್ ಗೆ ಅನುಮೋದನೆ ನೀಡಲು ಸರ್ಕಾರದಿಂದ ರಚಿತವಾಗಿರುವ ಅಧಿಕಾರಯುಕ್ತ ಸಮಿತಿಯ ಮುಂದೆ ಪ್ರಸ್ತಾವನೆಯನ್ನು ಮಂಡಿಸಿ ಕಾಮಗಾರಿಗೆ ಆಡಳಿತಾತ್ಮಕ ಹಾಗೂ ಟೆಂಡರ್ ಗೆ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

6. ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ದಿನಾಂಕ: 20-09-2019ರ ಆದೇಶದಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ 2018-19ನೇ ಸಾಲಿನಲ್ಲಿ ಘೋಷಿಸಿ ಒದಗಿಸಿರುವ ಅನುದಾನದಲ್ಲಿ ಕೈಗೊಳ್ಳಲು ಉದ್ದೇಶಿಸಿ ಸರ್ಕಾರದ ಆದೇಶ ಸಂಖ್ಯೆ: ನಅಇ 375 ಎಂಎನ್ ವೈ 2018, ದಿನಾಂಕ: 01-02-2019 ರಂತೆ ಅನುಮೋದಿಸಿದ್ದ "ಮುಖ್ಯಮಂತ್ರಿಗಳ ನವ ಬೆಂಗಳೂರು" ಯೋಜನೆಯನ್ನು ರದ್ದುಪಡಿಸಿ ಪರ್ಯಾಯವಾಗಿ "ಮುಖ್ಯಮಂತ್ರಿಗಳ ನವ ನಗರೋತ್ಥಾನ" ಯೋಜನೆಯಡಿಯಲ್ಲಿ ಕೈಗೊಳ್ಳುವ ಕಾಮಗಾರಿಗಳ ಕ್ರಿಯಾ ಯೋಜನೆಗೆ ಕೆಲವೊಂದು ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದ್ದು, ಆದೇಶದ ಅನುಬಂಧ-2ರ ಕ್ರಮ ಸಂಖ್ಯೆ: 1040 ರಲ್ಲಿ "Additional Grants for Widening of Begur main Road"ನ ಕಾಮಗಾರಿಗೆ ರೂ.35.00 ಕೋಟಿಗಳ ಅನುದಾನವನ್ನು ನಿಗಧಿಪಡಿಸಲಾಗಿರುತ್ತದೆ.

7. ಮೇಲೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ದಿನಾಂಕ: 04-11-2019 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ವಿಷಯವನ್ನು ಚರ್ಚಿಸಿ ನಿರ್ಣಯಿಸಿದಂತೆ ಈ ಆದೇಶ.

**<u>ಸರ್ಕಾರಿ ಆದೇಶ ಸಂಖ್ಯೆ: ನಅಇ 122 ಎಂಎನ್‌ವೈ 2019,</u>**

**<u>ಬೆಂಗಳೂರು, ದಿನಾಂಕ: 13-01-2020.</u>**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, 2016-17 ಮತ್ತು 2017-18ನೇ ಸಾಲಿನಲ್ಲಿ ವಿಶೇಷ ಮೂಲಭೂತ ಸೌಕರ್ಯಕ್ಕೆ ಬಂಡವಾಳ ಬೆಂಬಲ ಯೋಜನೆಯಡಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೈಗೊಳ್ಳುವ "Widening of Begur Road from Ch: 0m to Ch: 3250m (Phase 1)"ರ ಕಾಮಗಾರಿಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 185 ಎಂಎನ್‌ವೈ 2017, ದಿನಾಂಕ: 26-12-2017ರ ಅನುಬಂಧ-7ರ ಕ್ರಮ ಸಂಖ್ಯೆ 15 ರಲ್ಲಿ ರೂ.15.00 ಕೋಟಿಗಳು ಮತ್ತು ಸರ್ಕಾರದ ಆದೇಶ ಸಂಖ್ಯೆ: ನಅಇ 375 ಎಂಎನ್ ವೈ 2018, ದಿನಾಂಕ: 20-09-2019ರ ಅನುಬಂಧ-2ರ ಕ್ರಮ ಸಂಖ್ಯೆ:1040 ರಲ್ಲಿ Additional Grants for Widening of Begur main Road"ನ ಕಾಮಗಾರಿಗೆ ರೂ.35.00 ಕೋಟಿಗಳ ಅನುದಾನವನ್ನು ನಿಗಧಿಪಡಿಸಿದ್ದು, ಒಟ್ಟು ರೂ.50.00 ಕೋಟಿಗಳ ಕಾಮಗಾರಿಯ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ಹಾಗೂ

ಅಧಿಕಾರಯುಕ್ತ ಸಮಿತಿಯ ನಿರ್ಣಯದಂತೆ ಎಲ್-1 ಗುತ್ತಿಗೆದಾರರಾದ Sri.A. Chenna Reddy, (ACR projects) ರವರು ನಮೂದಿಸಿರುವ ಬಿಡ್ ಮೊತ್ತವನ್ನು ಟೆಂಡರಾಗಿಟ್ಟ ಮೊತ್ತ ರೂ.44,90,68,394.62 ಕ್ಕೆ ಹೋಲಿಸಿದಾಗ ಶೇ.5% ರಷ್ಟು (ಅನ್ವಯವಾಗುವ ಎಲ್ಲಾ ತೆರಿಗೆ ಸೇರಿದಂತೆ) ಅಂದರೆ, ರೂ.47,15,21,814.40ಕ್ಕೆ ಮಿತಿಗೊಳಿಸಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಟೆಂಡರ್‌ಗೆ ಸರ್ಕಾರದ ಅನುಮೋದನೆ ನೀಡಿದೆ.

1. ಅನುಮೋದನೆ ನೀಡಿರುವ ಕಾಮಗಾರಿಯ ಟೆಂಡರ್ ಮೊತ್ತಕ್ಕೆ ಬಿಡ್‌ದಾರರು ಒಪ್ಪದ ಪಕ್ಷದಲ್ಲಿ ಮರು ಟೆಂಡರ್ ಕರೆಯುವುದು.

2. ಸದರಿ ಕಾಮಗಾರಿಯ ಟೆಂಡರ್ ನ ಮೊದಲನೆಯ ಕರೆಯ ವಿಳಂಬಕ್ಕೆ ಕಾರಣರಾಗಿದ್ದ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಲು ಆಯುಕ್ತರಿಗೆ ಸೂಚಿಸಿದೆ.

3. ಮೇಲಿನ ಕಾಮಗಾರಿಗಳನ್ನು ಕೆ.ಟಿ.ಪಿ.ಪಿ. ಕಾಯ್ದೆ/ನಿಯಮಗಳು ಹಾಗೂ ಎಲ್ಲಾ ಚಾಲ್ತಿ ನಿಯಮಗಳನ್ನು ಪಾಲಿಸಿಕೊಂಡು ಅನುಷ್ಠಾನಗೊಳಿಸುವುದು.

4. ಈ ಕಾಮಗಾರಿಗೆ ತಗಲುವ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 185 ಎಂಎನ್‌ವೈ 2017, ದಿನಾಂಕ: 26-12-2017ರ ಅನುಬಂಧ-7ರ ಕ್ರಮ ಸಂಖ್ಯೆ 15 ರಲ್ಲಿ ರೂ.15.00 ಕೋಟಿಗಳನ್ನು ಮತ್ತು ಸರ್ಕಾರದ ಆದೇಶ ಸಂಖ್ಯೆ: ನಅಇ 375 ಎಂಎನ್ ವೈ 2018, ದಿನಾಂಕ: 20-09-2019ರ ಅನುಬಂಧ-2ರ ಕ್ರಮ ಸಂಖ್ಯೆ: 1040 ರಲ್ಲಿನ ಬೆಂಗಳೂರಿಗೆ ವಿಶೇಷ ಮೂಲಭೂತ ಸೌಕರ್ಯಕ್ಕೆ ಬಂಡವಾಳ ಬೆಂಬಲ ಯೋಜನೆಯಡಿ ಮೀಸಲಿಟ್ಟಿರುವ ರೂ.35.00 ಕೋಟಿಗಳ ಅನುದಾನದಲ್ಲಿ ಮತ್ತು ಟೆಂಡರ್ ಪ್ರೀಮಿಯಂ ಮೊತ್ತವನ್ನು ಪಾಲಿಕೆ ಸ್ವಂತ ಸಂಪನ್ಮೂಲದಿಂದ ಭರಿಸುವುದು.

5. ಮೇಲಿನ ಕಾಮಗಾರಿಯನ್ನು ಸರ್ಕಾರದಿಂದ ಮಂಜೂರಾದ ಮೊತ್ತದ ಮಿತಿಯಲ್ಲಿಯೇ ಯಾವುದೇ ಹೆಚ್ಚುವರಿಯಾಗದಂತೆ ಅನುಷ್ಠಾನಗೊಳಿಸಲು ಕ್ರಮ ವಹಿಸತಕ್ಕದ್ದು.

6. ಸರ್ಕಾರವು ಕಾಮಗಾರಿಗಳಿಗೆ ಆಡಳಿತಾತ್ಮಕ ಮತ್ತು ಟೆಂಡರ್ ಗಳಿಗೆ ಅನುಮೋದನೆ ನೀಡಿದ್ದಾಗ್ಯೂ ಸಹ ಕಾಮಗಾರಿಯು ಪುನರಾವರ್ತನೆ ಆಗದಂತೆ ನೋಡಿಕೊಳ್ಳತಕ್ಕದ್ದು. ಅನುಮೋದನೆಗೊಂಡಿರುವ ಕಾಮಗಾರಿ ಯನ್ನಲ್ಲದೆ ಯಾವುದೇ ಕಾರಣಕ್ಕೆ ಬೇರೆ ಕಾಮಗಾರಿಗಳನ್ನು ಕೈಗೊಳ್ಳಬಾರದು.

7. ಕರ್ನಾಟಕ ಆರ್ಥಿಕ ಸಂಹಿತೆ 1958 ಸಾಧಿಲ್ವಾರು ವೆಚ್ಚ ಕೈಪಿಡಿ ಅಧಿನಿಯಮ ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ಎಲ್ಲಾ ಕಾಯ್ದೆ ನಿಯಮಗಳುಸಾರ ಕ್ರಮವಹಿಸತಕ್ಕದ್ದು.

8. ಮೇಲಿನ ಕಾಮಗಾರಿಗೆ 3rd Party Quality Monitors ಗಳನ್ನು ನೇಮಿಸಿಕೊಂಡು ಉತ್ತಮ ಗುಣಮಟ್ಟದಿಂದ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಪ್ರಧಾನ ಅಭಿಯಂತರರು ಕ್ರಮ ವಹಿಸತಕ್ಕದ್ದು.

9. ದಿನಾಂಕ: 04-11-2019ರ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಯಲ್ಲಿ ನಮೂದಿಸಿರುವ ಎಲ್ಲಾ ಷರತ್ತು ಹಾಗೂ ನಿಬಂಧನೆಗಳನ್ನು ತಪ್ಪದೆ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

**(ಕೆ.ಎ. ಹಿದಾಯತ್ತುಲ್ಲ)**
ಸರ್ಕಾರದ ಉಪ ಕಾರ್ಯದರ್ಶಿ-3,
ನಗರಾಭಿವೃದ್ಧಿ ಇಲಾಖೆ

**ಇವರಿಗೆ:**

1. ಮಹಾಲೇಖಪಾಲರು, ಲೆಕ್ಕ ತಪಾಸಣೆ/ಲೆಕ್ಕಪತ್ರ, ಕರ್ನಾಟಕ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು.
3. ಮಾನ್ಯ ಮುಖ್ಯಮಂತ್ರಿಯವರ ಅಪರ ಮುಖ್ಯ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
4. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.
5. ವಿಶೇಷ ಆಯುಕ್ತರು (ಯೋಜನೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.
6. ಪ್ರಧಾನ ಅಭಿಯಂತರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.
7. ಮುಖ್ಯ ಲೆಕ್ಕಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.
8. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ 3 ಮತ್ತು 9), ವಿಧಾನಸೌಧ, ಬೆಂಗಳೂರು.
9. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ.
10. ಸರ್ಕಾರದ ಉಪ ಕಾರ್ಯದರ್ಶಿಗಳು-3 ರವರ ಆಪ್ತ ಸಹಾಯಕರು, ನಗರಾಭಿವೃದ್ಧಿ ಇಲಾಖೆ.
11. ಕಾರ್ಯಪಾಲಕ ಅಭಿಯಂತರರು (ತಾಂತ್ರಿಕ ಕೋಶ), ನಗರಾಭಿವೃದ್ಧಿ ಇಲಾಖೆ.
12. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

13/1/20

**ಕರ್ನಾಟಕ ಸರ್ಕಾರ**

ಸಂಖ್ಯೆ: ಮೂಅಇ 121 ರಾರಾಹೆ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:28.09.2020

ಇವರಿಂದ,
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ, ಬಂದರುಗಳು
ಒಳನಾಡು ಮತ್ತು ಜಲಸಾರಿಗೆ ಇಲಾಖೆ,
ಬೆಂಗಳೂರು.

4/5
29/9/2020

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಾನಂದ ಎಸ್.ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1871 ಕ್ಕೆ ಉತ್ತರ ಒದಗಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಾನಂದ ಎಸ್.ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1871 ಕ್ಕೆ ಸಂಬಂಧಿಸಿದ 25 ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ಚಂದ್ರಕಲಾ.ಎಸ್.ಎನ್)**
ಸರ್ಕಾರದ ಅಧೀನ ಕಾರ್ಯದರ್ಶಿ-1 (ಪ್ರ),
ಮೂಲಸೌಲಭ್ಯ ಅಭಿವೃದ್ಧಿ, ಬಂದರುಗಳು
ಒಳನಾಡು ಮತ್ತು ಜಲಸಾರಿಗೆ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | : | 1871 |
| 2) | ಸದಸ್ಯರ ಹೆಸರು | : | ಶ್ರೀ ಶಿವಾನಂದ ಎಸ್.ಪಾಟೀಲ್ (ಬಸವನಬಾಗೇವಾಡಿ) |
| 3) | ಉತ್ತರಿಸಬೇಕಾದ ದಿನಾಂಕ | : | 29.09.2020 |
| 4) | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗದಗ-ಸೋಲಾಪೂರ ರೈಲ್ವೆ ಬ್ರಾಡ್ ಗೇಜ್ ಲೆವಲ್ ಕ್ರಾಸಿಂಗ್ 72ರಲ್ಲಿ ಟಿ.ವಿ.ಯು (ಟ್ರೇನ್ ವೆಹಿಕಲ್ ಯೂನಿಟ್) ಕೌಂಟ್ ಪ್ರಸ್ತುತ ಎಷ್ಟು ಇರುತ್ತದೆ; | ಜುಲೈ 2018ರ ಸೆನ್ಸಸ್ ಪ್ರಕಾರ ಗದಗ-ಸೋಲಾಪುರ ರೈಲ್ವೆ ಬ್ರಾಡ್ ಗೇಜ್ ಲೆವಲ್ ಕ್ರಾಸಿಂಗ್ 72ರ ಟಿ.ವಿ.ಯ ಎಣಿಕೆಯು 7080 ಇರುತ್ತದೆ. |
| ಆ) | ಗದಗ-ಸೋಲಾಪುರ ರೈಲ್ವೆ ಬ್ರಾಡ್ ಗೇಜ್ ನ ಕೂಡಗಿ-ಹೊಟಗಿ ರೈಲ್ವೆ ಜೋಡುಹಳ್ಳಿ (ರೈಲ್ವೆ ಲೈನ್ ಡಬಲಿಂಗ್) ನಿರ್ಮಾಣ ಯೋಜನೆಯಲ್ಲಿ ಲೆವಲ್ ಕ್ರಾಸಿಂಗ್ 72ರಲ್ಲಿ ಮುಳವಾಡ ರೈಲ್ವೆ ನಿಲ್ದಾಣ ಹತ್ತಿರ ರೈಲ್ವೆ ಮೇಲುಸೇತುವೆ ನಿರ್ಮಿಸಲು ಯೋಚಿಸಲಾಗಿದೆಯೇ: | ನೈರುತ್ಯ ರೈಲ್ವೆ ಹಾಗೂ ದಕ್ಷಿಣ ಕೇಂದ್ರ ರೈಲ್ವೆ ಇಲಾಖೆಯಿಂದ ಟಿ.ವಿ.ಯು ಎಣಿಕೆ ಒಂದು ಲಕ್ಷಕ್ಕಿಂತ ಹೆಚ್ಚಾಗಿರುವ ಎಲ್.ಸಿ.ಗೇಟ್ ಗಳಲ್ಲಿ ನೂತನವಾಗಿ ರಸ್ತೆ ಮೇಲು/ಕೆಳ ಸೇತುವೆಗಳನ್ನು ನಿರ್ಮಾಣ ಮಾಡುವ ಪ್ರಸ್ತಾವನೆಗಳು ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಗಳಲ್ಲಿ ಈ ಕಾಮಗಾರಿಯು ಸೇರಿರುತ್ತದೆ. |
| ಇ) | ಹಾಗಿದ್ದಲ್ಲಿ ಈ ರೈಲ್ವೆ ಮೇಲ್ಸೇತುವೆ ನಿರ್ಮಾಣಕ್ಕಾಗಿ ಈವರೆಗೂ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸರ್ಕಾರದ ಪರಿಶೀಲನೆಯಲ್ಲಿದೆ. |
| ಈ) | ಸಾರ್ವಜನಿಕ ಹಿತದೃಷ್ಟಿಯಿಂದ ಲೆವಲ್ ಕ್ರಾಸಿಂಗ್ 72ರಲ್ಲಿ ಯಾವ ನಿರ್ದಿಷ್ಟ ಕಾಲಮಿತಿಯೊಳಗೆ ರೈಲ್ವೆ ಮೇಲ್ಸೇತುವೆ ನಿರ್ಮಿಸಲಾಗುವುದು; | ಸರ್ಕಾರದ ಪರಿಶೀಲನೆಯಲ್ಲಿದೆ. |

**ಸಂಖ್ಯೆ:ಮೂಲಅಇ 121 ರಾರಾಹೆ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ



ಕರ್ನಾಟಕ ಸರ್ಕಾರ

ಸಂಖ್ಯೆ: ಸಿಆಸುಇ 82 ಎಸ್‌ಎಸ್‌ಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಕೊಠಡಿ ಸಂಖ್ಯೆ: 363ಇ, ವಿಧಾನಸೌಧ,
ಬೆಂಗಳೂರು, ದಿನಾಂಕ: 26.09.2020.

**ಇವರಿಂದ,**
ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ವಿಧಾನಸೌಧ,
ಬೆಂಗಳೂರು.

4/5
29/9/2020

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 549ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ಅ.ಸ.ಪ ಸಂಖ್ಯೆ: ವಿಸಪ್ರಶಾ/15ನೇವಿಸ/7ಅ/ಚುಗು-ಚುರ.ಪ್ರಶ್ನೆ/07/2020; ದಿನಾಂಕ: 21.09.2020.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 549ಕ್ಕೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

26/9/2020

(ಮಾರುತಿ ಪ್ರಸನ್ನ ಬಿ.ವಿ.)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-7).

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ — 549
2. ಸದಸ್ಯರ ಹೆಸರು — ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)
3. ಉತ್ತರಿಸುವ ದಿನಾಂಕ — 29.09.2020
4. ಉತ್ತರಿಸುವ ಸಚಿವರು — ಮುಖ್ಯಮಂತ್ರಿ

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | 2011ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ ಪರೀಕ್ಷೆಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | 2011ನೇ ಸಾಲಿನ ಆಯ್ಕೆ ಪ್ರಕ್ರಿಯೆಯು ಮುಕ್ತಾಯವಾಗಿದ್ದರೂ ಸಹ ಕಳೆದ ವಿಧಾನಸಭಾ ಅಧಿವೇಶನದಲ್ಲಿ ದಿನಾಂಕ: 20.03.2020ರಂದು ಸದನದಲ್ಲಿ ನಿಯಮ 69ರಡಿಯಲ್ಲಿನ ಪ್ರಸ್ತಾವನೆಗೆ ಉತ್ತರಿಸುವಾಗ 2011ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ಸ್ ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆ ಕುರಿತು ಸದರಿ ವಿಷಯವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸುವುದಾಗಿ ಹೇಳಲಾಗಿರುತ್ತದೆ. ಅದರಂತೆ ಪರಿಶೀಲಿಸಲಾಗುತ್ತಿದೆ. |
| ಆ) | ಸದರಿ ಪ್ರಸ್ತಾವನೆಯಂತೆ ಈವರೆವಿಗೂ ನೇಮಕಾತಿ ಆದೇಶ ಕೊಡದೇ ಇರುವುದಕ್ಕೆ ಕಾರಣವೇನು; | |
| ಇ) | ಸದರಿ ನೇಮಕಾತಿಯಲ್ಲಿ ಆಯ್ಕೆಯಾಗಿರುವ ಬಹಳ ವಿದ್ಯಾರ್ಥಿಗಳು ಬಡವರಾಗಿದ್ದು, 9 ವರ್ಷಗಳಿಂದ ನೇಮಕಾತಿ ಆದೇಶಕ್ಕಾಗಿ ಕಾಯುತ್ತಿರುವುದರಿಂದ ಇವರೆಲ್ಲರಿಗೂ ತಕ್ಷಣವೇ ಸರ್ಕಾರ ನೇಮಕಾತಿ ಆದೇಶ ನೀಡುವುದೇ? | |

ಸಂಖ್ಯೆ: ಸಿಆಸುಇ 82 ಎಸ್‌ಎಸ್‌ಸಿ 2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ.